# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1111

ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ )

ಉತ್ತರಿಸುವ ದಿನಾಂಕ : 22.12.2021.

ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಾಂತ ಸ್ವಾತಂತ್ರ್ಯ ಪೂರ್ವದಿಂದ ಒಂದೇ ಸ್ಥಳದಲ್ಲಿ ವಾಸವಾಗಿರುವ ರೈತರ ಸ್ವಾಧೀನದಲ್ಲಿರುವ ಜಮೀನುಗಳು ಇನ್ನೂ ಸರ್ಕಾರಿ ಹೆಸರಿನಲ್ಲಿಯೇ ಉಳಿದುಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ರೈತರ ನೆರವಿಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಸ್ವಾತಂತ್ರ್ಯ ಪೂರ್ವದಿಂದ ಒಂದೇ ಸ್ಥಳದಲ್ಲಿ ವಾಸವಾಗಿರುವ ರೈತರ ಸ್ವಾಧೀನದಲ್ಲಿರುವ ಸರ್ಕಾರಿ ಜಮೀನಿನಲ್ಲಿ ಅನಧಿಕೃತವಾಗಿ ಮಾಡುತ್ತಿರುವ ಸಾಗುವಳಿಯನ್ನು ಸಕ್ರಮಗೊಳಿಸುವ ಸಲುವಾಗಿ ದಿನಾಂಕ: 20.03.1991 ರಿಂದ ಜಾರಿಗೆ ಬರುವಂತೆ ಕಲಂ-94ಎ ರಡಿಯಲ್ಲಿ ನಮೂನೆ-50ರ ಅರ್ಜಿ ಸಲ್ಲಿಸಲು ದಿನಾಂಕ:19.09.1991ರವರೆಗೆ ಅವಕಾಶ ಕಲ್ಪಿಸಲಾಗಿತ್ತು.<br><br>ನಂತರ ನಮೂನೆ-50 ರಲ್ಲಿ ಅರ್ಜಿ ಸಲ್ಲಿಸದೇ ಇರುವವರಿಗಾಗಿ ಮತ್ತೊಂದು ಅವಕಾಶ ಕಲ್ಪಿಸುವ ಸಲುವಾಗಿ ದಿನಾಂಕ:01.11.1998ರಿಂದ ಜಾರಿಗೆ ಬರುವಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ-94ಬಿ ಅನ್ನು ಸೇರ್ಪಡೆ ಮಾಡಿ ನಮೂನೆ-53ರಲ್ಲಿ ದಿನಾಂಕ:30/04/1999ರವರೆಗೆ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿತ್ತು.<br><br>ತದನಂತರ ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 94-ಎ(4)ಗೆ ದಿನಾಂಕ:17.03.2018 ರಂದು ತಿದ್ದುಪಡಿ ತಂದು ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸುವುದಕ್ಕಾಗಿ ಇದ್ದಂತಹ ದಿನಾಂಕ:14.04.1990 ರ ದಿನಾಂಕವನ್ನು ತಿದ್ದುಪಡಿ ಮಾಡಿ ದಿನಾಂಕ:01.01.2005 ಎಂದು ನಿಗದಿಪಡಿಸಲಾಗಿದ್ದು, ದಿನಾಂಕ:01.01.2005 ಕ್ಕಿಂತ ಮೊದಲು ಸರ್ಕಾರಿ ಜಮೀನಿನಲ್ಲಿ ಅನಧಿಕೃತ ಸಾಗುವಳಿ ಮಾಡುತ್ತಿರುವವರಿಗೆ ಸಕ್ರಮಕ್ಕಾಗಿ ಅರ್ಜಿ ಸಲ್ಲಿಸಲು ದಿನಾಂಕ:17.03.2018 ರಿಂದ 16.03.2019 ರವರೆಗೆ ಕಾಲಾವಕಾಶವನ್ನು ನೀಡಲಾಗಿತ್ತು. |

| | | |
|---|---|---|
| ಆ) | ಗ್ರಾಮ, ಪಟ್ಟಣ ಪಂಚಾಯಿತಿ, ಬಫರ್ ಪ್ರದೇಶ ಹೆಸರಿನಲ್ಲಿ ರೈತರ ಅಕ್ರಮ ಸಕ್ರಮ ಅರ್ಜಿಗಳನ್ನು ಅಧಿಕಾರಿಗಳು ವಿನಾಕಾರಣ ತಿರಸ್ಕರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಸರ್ಕಾರಿ ಜಮೀನುಗಳಲ್ಲಿ ಸಾಗುವಳಿ ಮಾಡುತ್ತಿರುವ ಸಾಗುವಳಿದಾರರು ಭೂ ಮಂಜೂರಾತಿ ಕೋರಿ ನಮೂನೆ-50, ನಮೂನೆ-53 ಮತ್ತು ನಮೂನೆ-57ರಡಿ ಅರ್ಜಿಗಳನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ. ಸದರಿ ಅರ್ಜಿಗಳನ್ನು ಸಂಬಂಧಪಟ್ಟ ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸಲಾದ ಬಗರ್ ಹುಕುಂ ಸಾಗುವಳಿ ಸಕ್ರಮೀಕರಣ ಸಮಿತಿಗಳಲ್ಲಿ ಮಂಡಿಸಿ ಮಂಜೂರಾತಿ ಮಾಡಲು ಕ್ರಮವಹಿಸಲಾಗುತ್ತಿದೆ. ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 108-ಎಫ್ ರಲ್ಲಿ ಈ ಕೆಳಕಂಡಂತೆ ಭೂ ಮಂಜೂರಾತಿಗೆ ಅರ್ಹರಿರುತ್ತಾರೆ.<br>(i) ಅವನು 18 ವರ್ಷಗಳ ವಯಸ್ಸಿನವನಾಗಿರಬೇಕು.<br>(ii) ಅವನು ಭೂಮಿಯು ಇರುವ ಅಥವಾ ಪಕ್ಕದಲ್ಲಿರುವ ತಾಲೂಕಿನಲ್ಲಿ, ತಾಲೂಕಿನ ಪರಿಮಿತಿಯೊಳಗೆ ಖಾಯಂ ನಿವಾಸಿಯಾಗಿರಬೇಕು.<br>(iii) ಅವನು ಖುದ್ದಾಗಿ ಸಾಗುವಳಿ ಮಾಡುವ ಸದ್ಭಾವಿಕ ಕೃಷಿಕ ಮತ್ತು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಉಪಬಂಧಗಳ ಮೇರೆಗೆ ಭೂಮಿಯನ್ನು ಹೊಂದುವುದು ಮತ್ತು ಪಡೆಯುವುದರಿಂದ ನಿಷಿದ್ಧನಾಗತಕ್ಕದ್ದಲ್ಲ.<br>(iv) ಅವನು 14ನೇ ಎಪ್ರಿಲ್ 1990ರ ದಿನಕ್ಕೆ ಕಡೆಯ ಪಕ್ಷ ಹಿಂದಿನ ಮೂರು ವರ್ಷಗಳು ಕಡಿಮೆ ಇಲ್ಲದ ಅವಧಿಯ ನಿರಂತರ ಭೂಮಿಯ ಅನಧಿಕೃತ ಅಧಿಭೋಗನಾಗಿರಬೇಕು.<br>(v) 2005ರ ಜನವರಿ ಮೊದಲ ದಿನಕ್ಕೆ 3 ವರ್ಷಕ್ಕಿಂತ ಕಡಿಮೆಯಿಲ್ಲದ ಅವಧಿಯವರೆಗೆ ನಿರಂತರ ಅರ್ಜಿ ಸಲ್ಲಿಸಿದ ಅರ್ಜಿದಾರರು ಅನಧಿಕೃತವಾಗಿ ಆಕ್ರಮಿಸಿಕೊಂಡ ಭೂಮಿಯಾಗಿದೆ.<br><br>ಪರಂತು, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳ ಸಂದರ್ಭದಲ್ಲಿ, ಅಂಥ ಅವಧಿಯು 1 ವರ್ಷಕ್ಕಿಂತ ಕಡಿಮೆಯಿರತಕ್ಕದ್ದಲ್ಲ ಎಂದು ಇದೆ.<br>ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 94-ಎ(ಎಫ್) ರಲ್ಲಿ ಭೂಸ್ವಾಧೀನಕ್ಕಾಗಿ ಉದ್ದೇಶಿಸಿದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರ, ರಾಜ್ಯ ಸರ್ಕಾರದ ಶಾಸನಾತ್ಮಕ ಅಥವಾ ಶಾಸನಾತ್ಮಕವಲ್ಲದ ನಿಕಾಯಗಳ ಯಾವುದೇ ಉದ್ದೇಶಿತ |

| | | |
|---|---|---|
| | | ಯೋಜನೆಗಾಗಿ ಅವಶ್ಯವಿರುವ ಜಾಗವಾಗಿದ್ದರೆ, ಅಂತಹ ಭೂಮಿಯನ್ನು ಸಕ್ರಮಗೊಳಿಸತಕ್ಕದ್ದಲ್ಲ ಎಂದು ಇದೆ.<br><br>ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 94-ಎ(4) ನ ಪರಂತುಕದನ್ವಯ ಕರ್ನಾಟಕ ಪೌರ ನಿಗಮಗಳ ಅಧಿನಿಯಮ, 1976ರ ಅಡಿಯಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ – 18 ಕಿ.ಮೀ., ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ರ ಉಪಬಂಧಗಳ ಅಡಿಯಲ್ಲಿ ಅನುಕ್ರಮವಾಗಿ ಬರುವ ಬೆಳಗಾವಿ, ಕಲಬುರ್ಗಿ, ಹುಬ್ಬಳ್ಳಿ-ಧಾರವಾಡ, ಮಂಗಳೂರು ಮತ್ತು ಮೈಸೂರು ನಗರಗಳು; ಮತ್ತು ಕರ್ನಾಟಕ ನಗರ ಪಾಲಿಕೆಗಳ ಅಧಿನಿಯಮ, 1976ರ ಉಪಬಂಧಗಳ ಅಡಿಯಲ್ಲಿ ಬರುವ ಇತರ ನಗರ ಪಾಲಿಕೆಗಳು - 10 ಕಿ.ಮೀ., ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಉಪಬಂಧಗಳ ಅಡಿಯಲ್ಲಿ ಬರುವ ಎಲ್ಲಾ ನಗರ ಪೌರಸಭೆಗಳು (CMC) - 5 ಕಿ.ಮೀ. ಹಾಗೂ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಉಪಬಂಧಗಳ ಅಡಿಯಲ್ಲಿನ ಎಲ್ಲಾ ಪೌರಸಭೆಗಳು (TMC) ಮತ್ತು ಪಟ್ಟಣ ಪಂಚಾಯಿತಿಗಳು-3 ಕಿ.ಮೀ., ನಿರ್ಬಂಧಿತ ಅಂತರದಲ್ಲಿ ಬರುವ ಜಮೀನಿನ ಅನಧಿಕೃತ ಸಾಗುವಳಿಯ ಸಕ್ರಮಗೊಳಿಸುವುದನ್ನು ನಿರ್ಬಂಧಿಸಲಾಗಿದೆ.<br><br>ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮಗೊಳಿಸಲು ನಮೂನೆ-53 ಮತ್ತು ನಮೂನೆ-57 ರಲ್ಲಿ ಸ್ವೀಕರಿಸಿದ ಅರ್ಜಿಗಳ ಪೈಕಿ ಮಂಜೂರಾತಿ ಮಾಡಲು ನಿಬಂಧಿತ ಅಂತರದಲ್ಲಿ ಬರುವ ಮತ್ತು ಕಾಯ್ದೆ ಹಾಗೂ ನಿಯಮಗಳಲ್ಲಿ ಪರಿಗಣಿಸಲು ಅವಕಾಶವಿಲ್ಲದಿರುವ ಅನರ್ಹ ಅರ್ಜಿಗಳನ್ನು ತಿರಸ್ಕರಿಸಲು ಕರ್ನಾಟಕ ಭೂ ಕಂದಾಯ ನಿಯಮಗಳು, 1966 ರ ನಿಯಮ 108ಸಿಸಿ ಮತ್ತು ನಿಯಮ 108 ಸಿಸಿಸಿ ಗೆ ತಿದ್ದುಪಡಿ ತಂದು ಜಿಲ್ಲಾಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ. |
| ಇ) | ಕೃಷಿ ಜಮೀನನ್ನು ದಾಖಲೆಗಳಲ್ಲಿ ಸ್ವಯಂ ಪ್ರೇರಿತವಾಗಿ ಕೃಷಿಯೇತರ ಜಮೀನು ಎಂದು ತಿದ್ದುವ ಕಾರ್ಯ ನಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಂಡಿದೆ? | ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕೆ ಪರಿವರ್ತಿಸುವುದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 95 ರಡಿ ಅವಕಾಶ ಕಲ್ಪಿಸಲಾಗಿದೆ.<br><br>ಪ್ರಸ್ತುತ ಪ್ರಮಾಣ ಪತ್ರ ಆಧಾರಿತ (Affidavit based) ಭೂ ಪರಿವರ್ತನೆಯ ತಂತ್ರಾಂಶ ಜಾರಿಗೊಳಿಸಿರುವುದರಿಂದ ನಿಗದಿತ ಅವಧಿಯಲ್ಲಿ ಅರ್ಜಿದಾರರು ಕೋರಿರುವ ಉದ್ದೇಶಕ್ಕಾಗಿ ಭೂ ಪರಿವರ್ತನೆಯಾದ ನಂತರ ಭೂಮಿ ತಂತ್ರಾಂಶದಲ್ಲಿ ಪಹಣಿ ಕಾಲಂ 9 ಮತ್ತು 10 ರಲ್ಲಿ ಭೂ.ಪ. (ಭೂ ಪರಿವರ್ತನೆ) ಎಂಬುದಾಗಿ ಫ್ಲ್ಯಾಗ್ |

| | | |
|---|---|---|
| | | (ನಮೂದು) ಆಗುತ್ತದೆ. ತದನಂತರ, ಸದರಿ ಸರ್ವೆ ನಂಬರ್ ಸರ್ವೆ ದಾಖಲೆಗಳಲ್ಲಿ ದುರಸ್ತಿಯಾದ ನಂತರ ಎನ್.ಎ. ಖರಾಬು ಎಂಬುದಾಗಿ ನಮೂದು ಮಾಡಲಾಗುತ್ತದೆ.<br>ಕೃಷಿ ಜಮೀನನ್ನು ಕೃಷಿಯೇತರ ಉದ್ದೇಶಕ್ಕೆ ಪರಿವರ್ತನೆ ಮಾಡಲು ಆನ್‌ಲೈನ್‌ನಲ್ಲಿ ತಂತ್ರಾಂಶವನ್ನು ಜಾರಿಗೇ ತಂದಿರುವುದರಿಂದ ಭೌತಿಕವಾಗಿ ಭೂ ಪರಿವರ್ತನೆ ಆದೇಶಗಳನ್ನು ನೀಡುವುದಿಲ್ಲ.<br>ಮುಂದುವರೆದು ವ್ಯವಸಾಯೇತರ ಉಪಯೋಗಕ್ಕಾಗಿ ವ್ಯವಸಾಯದ ಭೂಮಿಯನ್ನು ಬದಲಾವಣೆ ಮಾಡಲು ಸಂಬಂಧಿಸಿದಂತೆ ಅಥವಾ ವ್ಯವಸಾಯೇತರ ಉದ್ದೇಶಕ್ಕಾಗಿ ವ್ಯವಸಾಯದ ಭೂಮಿಕ ದಾರಕನು ಉಪಯೋಗಿಸಲು ಅಧಿಕಾರ ನೀಡುವ ಸ್ಪಷ್ಟನೆಯಾದ ದಸ್ತಾವೇಜನ್ನು ಸೃಷ್ಟಿಸುವುದು/ ಸೃಷ್ಟಿಸಿದಲ್ಲಿ ಒಂದು ವರ್ಷಗಳ ಕಾರಾವಾಸ ಮತ್ತು ಐದು ಸಾವಿರ ರೂಪಾಯಿಗಳ ಜುಲ್ಮಾನೆ ವಿಧಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ರ ಕಲಂ 192-ಎ(6) ರಡಿ ಅವಕಾಶ ಕಲ್ಪಿಸಲಾಗಿದೆ. |

ಸಂಖ್ಯೆ: ಆರ್‌ಡಿ 248 ಎಲ್‌ಜಿಕ್ಯೂ 2021 (ಇ)

(ಆರ್. ಅಶೋಕ)
ಕಂದಾಯ ಸಚಿವರು.